# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1650

ಸದಸ್ಯರ ಹೆಸರು : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 19.03.2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯಲ್ಲಿರುವ ಬೀದರ್, ಬೆಂಗಳೂರು ವಯಾ ಹೈದ್ರಾಬಾದ್ ಮಾರ್ಗವಾಗಿ ಚಲಿಸುವ ಎ.ಸಿ. ಬಸ್ಸುಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಆಶೋಕ ಲೇಲ್ಯಾಂಡ, ಟಾಟಾ ಹಾಗೂ ತತ್ಸಮಾನ ಮಾದರಿಯ ಸಾಮಾನ್ಯ ಬಸ್ಸುಗಳ ಜೀವಮಾನವನ್ನು 9.00 ಲಕ್ಷ ಕಿ.ಮೀ. ಹಾಗೂ ಕರೋನಾ ಹವಾನಿಯಂತ್ರಿತ ಬಸ್ಸುಗಳ ಜೀವಮಾನವನ್ನು 11.00 ಲಕ್ಷ ಕಿ.ಮೀ.ಗೆ ನಿಗದಿಪಡಿಸಲಾಗಿರುತ್ತದೆ. ನಿಗದಿಪಡಿಸಿದ ಕಿ.ಮೀ. ಕ್ರಮಿಸಿದ ನಂತರ ಬಸ್ಸಿನ ಭೌತಿಕ ಮತ್ತು ತಾಂತ್ರಿಕ ಸ್ಥಿತಿಗತಿ ಆಧಾರದ ಮೇಲೆ ನಿಷ್ಕ್ರಿಯೆಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಿಂದಲೂ ಹಳೆಯ ಎಲ್ಲಾ ತರಹದ ಬಸ್ಸುಗಳು ಸಂಚರಿಸುತ್ತಿರುವುದರಿಂದ ಪ್ರಯಾಣಿಕರಿಗೆ ತೊಂದರೆ ಉಂಟಾಗಿರುವುದು ನಿಜವೇ; (ಮಾಹಿತಿ ನೀಡುವುದು) | ಸಂಸ್ಥೆಯಿಂದ ಪ್ರಸ್ತುತ ಬೀದರ್‌ನಿಂದ ಬೆಂಗಳೂರಿಗೆ 02 ಹವಾ ನಿಯಂತ್ರಣ ರಹಿತ ಸ್ಲೀಪರ್ ವಾಹನಗಳ ಸಂಖ್ಯೆ ಕೆಎ–38 ಎಫ್–1078 ಹಾಗೂ ಕೆಎ–38 ಎಫ್–1084 ವಾಹನಗಳು ಸಂಚರಿಸುತ್ತಿವೆ. ಸದರಿ ಎರಡು ವಾಹನಗಳು ಕ್ರಮವಾಗಿ 5,16,365 ಕಿ.ಮೀ. & 7,53,337 ಕಿ.ಮೀ. ಕ್ರಮಿಸಿದ್ದು ಉತ್ತಮ ಸ್ಥಿತಿಯಲ್ಲಿರುತ್ತವೆ.<br><br>ಈ ಮುಂಚೆ ಸದರಿ ಮಾರ್ಗದಲ್ಲಿ ಕಾರ್ಯಾಚರಣೆಯಲ್ಲಿದ್ದ ಹವಾ ನಿಯಂತ್ರಣ ರಹಿತ ಸ್ಲೀಪರ್ ವಾಹನ ಸಂಖ್ಯೆ ಕೆಎ–38 ಎಫ್–1085 ವಾಹನವು 2 ಬಾರಿ ಮಾರ್ಗ ಮಧ್ಯ ಅವಘಡ ಸಂಭವಿಸಿ ಪ್ರಯಾಣಿಕರಿಗೆ ಅನಾನುಕೂಲವಾಗಿರುವುದನ್ನು ಗಮನಿಸಿ ಸದರಿ ವಾಹನವನ್ನು ಬದಲಾಯಿಸಿ ಉತ್ತಮ ಸ್ಥಿತಿಯ ವಾಹನ ಸಂಖ್ಯೆ ಕೆಎ–38 ಎಫ್–1078 ವಾಹನವನ್ನು ನಿಯೋಜಿಸಲಾಗಿರುತ್ತದೆ. ಸದರಿ ವಾಹನಗಳು ಉತ್ತಮ ಸ್ಥಿತಿಯಲ್ಲಿರುವ ವಾಹನಗಳಾಗಿದ್ದು, ಅವುಗಳ ಸ್ಥಿತಿಗತಿಯ ಬಗ್ಗೆ ಮೇಲಿಂದ ಮೇಲೆ ಪರಿಶೀಲಿಸಿ ಪ್ರಯಾಣಿಕರಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ಕ್ರಮ ಕೈಕೊಳ್ಳಲಾಗುತ್ತಿದೆ. ವಾಹನ ಬದಲಾವಣೆಯ ನಂತರ ಪ್ರಯಾಣಿಕರಿಗೆ ಯಾವುದೇ ರೀತಿಯ ಅನಾನುಕೂಲಗಳಾಗಿರುವ ಕುರಿತು ವರದಿಯಾಗಿರುವುದಿಲ್ಲ.<br><br>ಪ್ರಸ್ತುತ ಬೀದರ್ ವಿಭಾಗದಲ್ಲಿ 489 ವಾಹನಗಳು ಇದ್ದು, ಈ ಪೈಕಿ 173 ವಾಹನಗಳು 9.00 ಲಕ್ಷ ಕಿ.ಮೀ. ಕ್ರಮಿಸಿರುವ ವಾಹನಗಳಾಗಿರುತ್ತವೆ. ನಿಗದಿತ ಕಿ.ಮೀ. ಕ್ರಮಿಸಿದ ನಂತರ ವಾಹನಗಳ ಭೌತಿಕ ಮತ್ತು ತಾಂತ್ರಿಕ ಸ್ಥಿತಿಗತಿಯನ್ನು ಪರಿಶೀಲಿಸಿ ಕಾರ್ಯಾಚರಣೆಗೆ ಯೋಗ್ಯವಲ್ಲದ ವಾಹನಗಳನ್ನು ಹಂತ ಹಂತವಾಗಿ ನಿಷ್ಕ್ರಿಯೆಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ಕಾರ್ಯಾಚರಣೆಗೆ ಯೋಗ್ಯವಿರುವ ವಾಹನಗಳ ಕಾರ್ಯಾಚರಣೆಯನ್ನು ಮುಂದುವರೆಸಿ, ಸದರಿ ವಾಹನಗಳ ತಾಂತ್ರಿಕ ಮತ್ತು ಭೌತಿಕ ಸ್ಥಿತಿಯನ್ನು ಮೇಲಿಂದ ಮೇಲೆ ಪರಿಶೀಲಿಸಿ, ಅಗತ್ಯ ನಿರ್ವಹಣೆಯನ್ನು ಮಾಡಿ ಪ್ರಯಾಣಿಕರಿಗೆ ಯಾವುದೇ ರೀತಿಯ ಅನಾನುಕೂಲವಾಗದಂತೆ ಕ್ರಮ ಜರುಗಿಸಲಾಗುತ್ತಿದೆ. |

ಇ) ಹೈದ್ರಾಬಾದ್ ಮಾರ್ಗವಾಗಿ ಚಲಿಸುವ ಬಸ್ಸುಗಳನ್ನು ಬದಲಾಯಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ಹಾಗೂ ಹೊಸದಾಗಿ ಅಂಬಾರಿ ಸ್ಲೀಪರ್ ಬಸ್ಸು ಹಾಕುವುದರಿಂದ ಸಾರ್ವಜನಿಕರಿಗೂ ಅನುಕೂಲವಾಗುವುದಲ್ಲವೇ; ಇದರ ಬಗ್ಗೆ ಸರ್ಕಾರವು ಯಾವ ಕ್ರಮ ಕೈಗೊಳ್ಳಲಾಗುವುದು? (ಮಾಹಿತಿ ನೀಡುವುದು)

ಬೀದರ್ – ಬೆಂಗಳೂರು ಹವಾನಿಯಂತ್ರಣ ರಹಿತ ಸ್ಲೀಪರ್ ವಾಹನಗಳೊಂದಿಗೆ ಬೀದರ್ ವಿಭಾಗದ ವಿವಿಧ ಘಟಕಗಳಿಂದ 8 ವಾಹನಗಳು ವಯಾ ಹೈದರಾಬಾದ್ ಮೂಲಕ ಬೆಂಗಳೂರಿಗೆ ಕಾರ್ಯಾಚರಿಸುತ್ತಿದ್ದು, ಸದರಿ ವಾಹನಗಳ ವಿವರಗಳು ಈ ಕೆಳಗಿನಂತಿರುತ್ತವೆ:–

| ಕ್ರ ಸಂ | ಮಾರ್ಗ | ವಾಹನ ಸಂಖ್ಯೆ | ವಾಹನ ಸ್ವರೂಪ | ಕ್ರಮಿಸಿದ ಕಿ.ಮೀ. |
|---|---|---|---|---|
| 1 | ಬೀದರ–ಬೆಂಗಳೂರು | ಕೆಎ38/ಎಫ್ 1080<br>ಕೆಎ38/ಎಫ್ 1081 | ರಾಜಹಂಸ | 6,86,802<br>6,61,821 |
| 2 | ಭಾಲ್ಕಿ–ಬೆಂಗಳೂರು | ಕೆಎ38/ಎಫ್ 1115<br>ಕೆಎ38/ಎಫ್ 1144 | ರಾಜಹಂಸ | 6,05,879<br>6,18,340 |
| 3 | ಬ.ಕಲ್ಯಾಣ–ಬೆಂಗಳೂರು | ಕೆಎ38/ಎಫ್ 1112<br>ಕೆಎ38/ಎಫ್ 1113 | ರಾಜಹಂಸ | 7,10,974<br>7,05,348 |
| 4 | ಔರಾದ–ಬೆಂಗಳೂರು | ಕೆಎ38/ಎಫ್ 1086<br>ಕೆಎ38/ಎಫ್ 1087 | ರಾಜಹಂಸ | 6,80,873<br>6,88,609 |

ಹೈದ್ರಾಬಾದ್ ಮಾರ್ಗದಲ್ಲಿ ಕಾರ್ಯಾಚರಣೆಯಲ್ಲಿರುವ ಮೇಲಿನ ವಾಹನಗಳು ಉತ್ತಮ ಸ್ಥಿತಿಯಲ್ಲಿದ್ದು, ಸಮರ್ಪಕವಾಗಿ ಕಾರ್ಯಾಚರಣೆಯಾಗುತ್ತಿವೆ.

ಪ್ರಸ್ತುತ ಕೋವಿಡ್–19 ಹಿನ್ನೆಲೆಯಲ್ಲಿ ಸಂಸ್ಥೆಯಲ್ಲಿ ಬಸ್ಸುಗಳು ಸಹಜ ಕಾರ್ಯಾಚರಣೆಗೊಳ್ಳದೇ ಇದ್ದು, ಸಂಸ್ಥೆಯು ಆರ್ಥಿಕ ನಷ್ಟದಲ್ಲಿರುವುದರಿಂದ 2020–21ನೇ ಸಾಲಿನಲ್ಲಿ ಹೊಸ ಬಸ್ಸುಗಳ ಖರೀದಿಯನ್ನು ಕೈಬಿಡಲಾಗಿರುತ್ತದೆ. ಹೊಸ ಬಸ್ಸುಗಳ ಖರೀದಿ ಪ್ರಕ್ರಿಯೆಗೆ ಚಾಲನೆ ನೀಡಿದಾಗ ವಿಭಾಗದ ಅವಶ್ಯಕತೆಗನುಗುಣವಾಗಿ ಹೊಸ ಬಸ್ಸುಗಳನ್ನು ಒದಗಿಸುವ ಕುರಿತು ಪರಿಶೀಲಿಸಲಾಗುವುದು.

ಪ್ರಸ್ತುತ ಬೀದರ್–ಬೆಂಗಳೂರು ವಯಾ ಹೈದರಾಬಾದ್ ಮಾರ್ಗದಲ್ಲಿ ಹೊಸದಾಗಿ ಅಂಬಾರಿ ಸ್ಲೀಪರ್ ವಾಹನ ಕಾರ್ಯಾಚರಣೆ ಮಾಡುವ ಪ್ರಸ್ತಾವನೆ ಇರುವುದಿಲ್ಲ.

ಸಂಖ್ಯೆ: ಟಿಡಿ 125 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು